# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 630

ಸದಸ್ಯರ ಹೆಸರು : ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 04-03-2021

ಉತ್ತರಿಸುವ ಸಚಿವರು : ಗೃಹ, ಕಾನೂನು & ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನ ಸಚಿವರು

| ಕ್ರ.ಸ | ವಿಷಯ | ಉತ್ತರ |
|---|---|---|
| (ಅ) | ಕೋರ್ಟ್ ಆವರಣಕ್ಕೆ ಬರುವಂತಹ ಕಕ್ಷಿದಾರರು, ಆರೋಪಿಗಳಿಗೆ ಯಾವ ರೀತಿ ಸುರಕ್ಷೆ ನೀಡಲಾಗುತ್ತಿದೆ. | ➢ ಮಾನ್ಯ ನ್ಯಾಯಾಲಯಗಳಿಗೆ ಸಿಬ್ಬಂದಿಗಳನ್ನು ಅವಶ್ಯಕತೆಮೇರೆಗೆ ನಿಯೋಜಿಸಿ ಭದ್ರತೆಯನ್ನು ನೀಡಲಾಗಿರುತ್ತದೆ. ಮುಂದುವರೆದು ನ್ಯಾಯಾಲಯಗಳ ಆವರಣಗಳಲ್ಲಿ CCTVಗಳನ್ನು ಅಳವಡಿಸಿ, ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>➢ ಆರೋಪಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸುವಾಗ ಠಾಣೆಯ ಸಿಬ್ಬಂದಿಗಳನ್ನು ನಿಯೋಜಿಸಿ, ಸೂಕ್ತ ಬಂದೋಬಸ್ತ್ ನೀಡಲಾಗುತ್ತಿರುತ್ತದೆ.<br>➢ ಪೊಲೀಸ್ ಠಾಣೆಗಳಿಂದ ಕರೆತರುವ ಆರೋಪಿಗಳಿಗೆ ಬೆಂಗಾವಲು ಪಡೆಗಳನ್ನು ನೇಮಿಸಲಾಗುತ್ತದೆ.<br>➢ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸುವ ಸಂದರ್ಭದಲ್ಲಿ ಸಿ.ಎ.ಅರ್ ವಿಭಾಗಗಳಿಂದ ಅಥವಾ ಸಂಬಂದಪಟ್ಟ ಪೊಲೀಸ್ ಠಾಣೆಗಳಿಂದ ಆರೋಪಿಗಳನ್ನು ಬೆಂಗಾವಲು ವಾಹನದಲ್ಲಿ ಕರೆತಂದು ನ್ಯಾಯಾಲಯಕ್ಕೆ ಹಾಜರು ಪಡಿಸಿ ನಂತರ ಸಂಬಂದಪಟ್ಟ ಅಧಿಕಾರಿ ಮತ್ತು ಸಿಬ್ಬಂದಿರವರುಗಳು ಬೆಂಗಾವಲು ವಾಹನದಲ್ಲಿ ವಾಪಸ್ ಕರೆದುಕೊಂಡು ಹೋಗುತ್ತಿರುತ್ತಾರೆ. |
| (ಆ) | ಕೋರ್ಟ್ ಆವರಣದಲ್ಲಿ ವಕೀಲರಿಂದಲೇ ಹಲ್ಲೆ ಆಗುವ ವಾತಾವರಣ ಸೃಷ್ಟಿ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು, ಕೋರ್ಟ್ ಆವರಣದಲ್ಲಿ ವಕೀಲರಿಂದಲೇ ಹಲ್ಲೆ ಆಗುವ ವಾತಾವರಣ ಸೃಷ್ಟಿ ಆಗಿರುವ ಬಗ್ಗೆ ಒಟ್ಟು 07 ಪ್ರಕರಣಗಳು ದಾಖಲಾಗಿರುತ್ತವೆ. ವಿವರ ಕೆಳಗಿನಂತಿದೆ. (ಕೆಳಗಿನ ಪಟ್ಟಿ ನೋಡಿ) |
| (ಇ) | ಬಂದಿದ್ದಲ್ಲಿ, ಅಂತಹ ವಕೀಲರ ವಿರುದ್ಧ ಯಾವ ರೀತಿಯ ಕಾನೂನು ಕ್ರಮ ಜರುಗಿಸಲಾಗುತ್ತದೆ? | ನ್ಯಾಯಾಲಯಗಳ ಆವರಣದಲ್ಲಿ ವಕೀಲರಿಂದ ಹಲ್ಲೆ ಆಗುವ ಪ್ರಕರಣಗಳು ವರದಿಯಾದಲ್ಲಿ ಕಾನೂನು ರೀತ್ಯ ಸೂಕ್ತ ಕ್ರಮ ಜರುಗಿಸಲಾಗುತ್ತದೆ. ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ಸೂಕ್ತ ಮುನ್ನೆಚ್ಚರಿಕಾ/ಭದ್ರತಾ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ. |
| (ಈ) | ಮುಂದೆ ಇಂತಹ ದುರ್ಘಟನೆ ನಡೆಯದ ಹಾಗೆ ಯವ ರೀತಿ ಕಾನೂನು ರೂಪಿಸಲಾಗಿದೆ? (ಸಂಪೂರ್ಣ ಮಾಹಿತಿ ನೀಡತಕ್ಕದ್ದು) | ಮಾನ್ಯ ನ್ಯಾಯಾಲಯಕ್ಕೆ ಪ್ರಮುಖ ಪ್ರಕರಣಗಳಲ್ಲಿ ಮತ್ತು ಸೂಕ್ಷ್ಮ ಪ್ರಕರಣಗಳಲ್ಲಿ ಆರೋಪಿಗಳನ್ನು ಹಾಜರುಪಡಿಸುವಾಗ ಸೂಕ್ತ ಬಂದೋಬಸ್ತ್ ಏರ್ಪಡಿಸಲಾಗುತ್ತದೆ. |

| ಕ್ರಸ | ಘಟಕ | ದಾಖಲಾದ ಪ್ರಕರಣಗಳ ಸಂಖ್ಯೆ | | |
|---|---|---|---|---|
| | | 2019 | 2020 | 2021 |
| 1 | ಬೆಂಗಳೂರು ನಗರ | 3 | 2 | 1 |
| 2 | ಚಿಕ್ಕಮಗಳೂರು | 0 | 1 | 0 |
| | ಒಟ್ಟು | 3 | 3 | 1 |

ಹೆಚ್‌ಡಿ 162 ಎಸ್‌ಎಸ್‌ಟಿ 2021

(ಬಸವರಾಜ ಬೊಮ್ಮಾಯಿ)
ಗೃಹ, ಕಾನೂನು & ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನ ಸಚಿವರು